## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 997
2. ಸದಸ್ಯರ ಹೆಸರು : ಶ್ರೀ ಕೆ.ಪ್ರತಾಪ ಚಂದ್ರಶೆಟ್ಟಿ(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು
3. ಉತ್ತರಿಸಬೇಕಾದ ದಿನಾಂಕ : 21.09.2021
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಚಿವರು

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಬ್ರಹ್ಮಾವರ ಸಕ್ಕರೆ ಕಾರ್ಖಾನೆ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವೆಷ್ಟು: ಅವುಗಳಲ್ಲಿ ಕಟ್ಟಡವಿರುವ ಮತ್ತು ಖಾಲಿಯಿರುವ ಭೂಮಿಯ ವಿಸ್ತೀರ್ಣವೆಷ್ಟು: ಈ ಜಾಗದ ಒತ್ತುವರಿಯನ್ನು ತಪ್ಪಿಸಲು ಜಾಗದ ಗಡಿಯನ್ನು ಗುರುತಿಸಲಾಗಿದೆಯೇ: ಕಳೆದ ದಶಕದಲ್ಲಿ ಜಾಗದ ಅಳತೆ ಮಾಡಿಸಿ ಗಡಿ ಗುರುತಿಸಿದ್ದರೆ ಮಾಹಿತಿಯನ್ನು ನೀಡುವುದು:</td><td>ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆಯು ಉಡುಪಿ ಜಿಲ್ಲೆಯ, ಬ್ರಹ್ಮಾವರ ತಾಲೂಕಿನ, ಬೈಕಾಡಿ ಗ್ರಾಮದ ಒಟ್ಟು 110 ಎಕರೆ ಭೂಮಿಯನ್ನು ಹೊಂದಿರುತ್ತದೆ. ಸದರಿ ಜಮೀನಿನ ಪೈಕಿ ಸರ್ವೆ ನಂಬರ್ 31/1ಏ1/ಪಿ-391ರಲ್ಲಿರುವ 47.90 ಎಕ್ರೆ ಭೂಮಿಯಲ್ಲಿ, 0.25 ಎಕರೆ (25 ಸೆಂಟ್ಸ್) ಭೂಮಿಯನ್ನು ನ್ಯಾಯಲಯದ ಆದೇಶದನ್ವಯ ಇಬ್ಬರು ಕಾರ್ಮಿಕರ ಬಾಕಿ ಪಾವತಿಗಾಗಿ ತಹಶೀಲ್ದಾರ್ – ಬ್ರಹ್ಮಾವರ ತಾಲೂಕು ಇವರು ದಿನಾಂಕ:16.06.2012 ರಂದು ಹರಾಜು ಮೂಲಕ ಮಾರಾಟ ಮಾಡಿರುತ್ತಾರೆ. ಪ್ರಸ್ತುತ ಕಾರ್ಖಾನೆಯು 109.75 ಎಕರೆ ವಿಸ್ತೀರ್ಣದ ಭೂಮಿಯನ್ನು ಹೊಂದಿರುತ್ತದೆ. ವಿವರ ಈ ಕೆಳಗಿನಂತಿದೆ.
<table>
<tr><th>ಕ್ರ.ಸಂ.</th><th>ಗ್ರಾಮ</th><th>ಸರ್ವೆ ನಂಬರ್</th><th>ವಿಸ್ತೀರ್( ಎಕರೆಗಳಲ್ಲಿ)</th></tr>
<tr><td>1</td><td rowspan="3">ಬೈಕಾಡಿ, ಬ್ರಹ್ಮಾವರ ತಾಲೂಕು ಉಡುಪಿ ಜಿಲ್ಲೆ</td><td>29/ಪಿ-2</td><td>37.10</td></tr>
<tr><td>2.</td><td>29/ಪಿ-3</td><td>25.00</td></tr>
<tr><td>3.</td><td>31/1ಏ1/ಪಿ-391</td><td>47.65</td></tr>
<tr><td colspan="3">ಒಟ್ಟು</td><td>109 .75</td></tr>
</table>
ಈ ಕಾರ್ಖಾನೆಯು ಹೊಂದಿರುವ ಮೇಲಿನ 109.75 ಎಕರೆ ಭೂಮಿಯಲ್ಲಿ ಅಂದಾಜು 30 ಎಕರೆಗಳಷ್ಟು ಭೂಮಿಯಲ್ಲಿ ಕಾರ್ಖಾನೆಯ ಕಟ್ಟಡ, ಸ್ಟೋರ್, ವರ್ಕ್ ಶಾಪ್, ಸಕ್ಕರೆ ಗೋದಾಮು, ವಸತಿ ಗೃಹಗಳು, ರಸ್ತೆ ಹಾಗೂ ಮತ್ತಿತರ ಕಟ್ಟಡಗಳ ನಿರ್ಮಾಣ ಮಾಡಲಾಗಿದೆ. ಸುಮಾರು 79.75 ಎಕ್ರೆಗಳಷ್ಟು ಭೂಮಿಯು ಖಾಲಿಯಿರುತ್ತದೆ ಹಾಗೂ ಖಾಲಿಯಿರುವ ಜಾಗದಲ್ಲಿ ಮರ ಗಿಡಗಳನ್ನು ಬೆಳಸಲಾಗಿರುತ್ತದೆ. ಕಾರ್ಖಾನೆಯ ಭೂಮಿಯು ಈವರೆಗೆ ಒತ್ತುವರಿಯಾಗಿರುವುದಿಲ್ಲ. ಮತ್ತು ಕಾರ್ಖಾನೆಯ ಭೂಮಿಯನ್ನು ಆಸುಪಾಸಿನವರು ಯಾರೂ ಒತ್ತುವರಿ ಮಾಡದಂತೆ ಜಾಗರೂಕತೆಯಿಂದ ನೋಡಿಕೊಳ್ಳಲಾಗುತ್ತಿದೆ. ಕಳೆದ ದಶಕದಲ್ಲಿ ಕಾರ್ಖಾನೆಯ ಭೂಮಿಯನ್ನು ಅಳತೆ ಮಾಡಿಸಿರುವುದಿಲ್ಲ. ಪ್ರಸಕ್ತ ಆಡಳಿತ ಮಂಡಳಿಯು ಕಾರ್ಖಾನೆಯ ಭೂಮಿಯನ್ನು ಅಳತೆ ಮಾಡಿಸಿ, ಒತ್ತುವರಿಯಾಗದಂತೆ ಗಡಿಯನ್ನು ಗುರುತಿಸಿ ಭದ್ರಪಡಿಸುವ ಕುರಿತು ಯೋಜಿಸಿರುತ್ತದೆ.</td></tr>
<tr><td>(ಆ)</td><td>ಬ್ರಹ್ಮಾವರ ಸಕ್ಕರೆ ಕಾರ್ಖಾನೆಯು ಸ್ಥಗಿತಗೊಳ್ಳುವ ಮೊದಲು ಹಾಗೂ ಸ್ಥಗಿತಗೊಂಡ ನಂತರ ಪಡೆದ ಸಾಲದ ಒಟ್ಟು ಮೊತ್ತವೆಷ್ಟುಯಾವ ಮೂಲಗಳಿಂದ ಯಾವ ಕಾರಣಕ್ಕಾಗಿಯಾವಾಗ ಸಾಲವನ್ನು ಪಡೆಯಲಾಗಿದೆ: ಅವುಗಳ ಅಸಲು ಹಾಗೂ ಬಡ್ಡಿಯ ಮೊತ್ತವೆಷ್ಟು : (ಸಾಲದ ಮೊತ್ತ, ವರ್ಷ, ಸಂಸ್ಥೆ ಮತ್ತು ಸಾಲದ ಉದ್ದೇಶವಾರು ಮಾಹಿತಿಯನ್ನು ನೀಡುವುದು)</td><td>ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆಯಲ್ಲಿ ಕಬ್ಬು ಅರೆಯುವಿಕೆಯನ್ನು ಸ್ಥಗಿತಗೊಳಿಸುವ ಮೊದಲು ಹೊಂದಿದ್ದ ಸಾಲದ ವಿವರ ಮತ್ತು ಸಾಲ ಪಡೆದ ಮೂಲ ಈ ಕೆಳಗಿನಂತೆ ಇರುತ್ತದೆ
<table>
<tr><th>ಸಾಲ ಮಂಜೂರಾತಿ ಆದೇಶದ ದಿನಾಂಕ</th><th>ಸಾಲದ ಮೊತ್ತ (ರೂ. ಲಕ್ಷಗಳಲ್ಲಿ)</th><th>ಸಾಲ ಪಡೆದ ಉದ್ದೇಶ</th></tr>
<tr><td colspan="3">ರಾಜ್ಯ ಸರ್ಕಾರದಿಂದ ಪಡೆದ ಸಾಲ :</td></tr>
<tr><td>5-12-1989</td><td>45.00</td><td>ರೈತರ ಕಬ್ಬಿನ ಬಾಕಿ ಪಾವತಿಗೆ</td></tr>
<tr><td>30-03-1992</td><td>175.00</td><td>ಬಿಡಿ ಭಾಗಗಳನ್ನು ಖರೀದಿಸಿ ಯಂತ್ರೋಪಕರಣಗಳನ್ನು ದುರಸ್ಥಿಪಡಿಸಿ ಕಬ್ಬು ಅರೆಯುವಿಕೆಗೆ ಕಾರ್ಖಾನೆಯನ್ನು ಸಜ್ಜುಗೊಳಿಸಲು ತಗಲುವ ವೆಚ್ಚಕ್ಕಾಗಿ ಮತ್ತು ಕಬ್ಬಿನ ಬಾಕಿ ಪಾವತಿಗಾಗಿ</td></tr>
</table></td></tr>
</table>

| | | |
|---|---|---|
| 30-10-1992 | 88.61 | ಬಿಡಿ ಭಾಗಗಳನ್ನು ಖರೀದಿಸಿ ಯಂತ್ರೋಪಕರಣಗಳನ್ನು ದುರಸ್ಥಿಪಡಿಸಿ ಕಬ್ಬು ಅರೆಯುವಿಕೆಗೆ ಕಾರ್ಖಾನೆಯನ್ನು ಸಜ್ಜುಗೊಳಿಸಲು ತಗಲುವ ವೆಚ್ಚಕ್ಕಾಗಿ |
| 30-03-1993 | 100.00 | ರೈತರ ಕಬ್ಬಿನ ಬಾಕಿ ಪಾವತಿಗೆ |
| 19-08-1994 | 624.64 | ಕಾರ್ಖಾನೆಯ ನಿರ್ಮಾಣಕ್ಕೆ ಐ. ಡಿ. ಬಿ. ಐ., ಐ. ಎಫ್. ಸಿ.ಐ. ಮತ್ತು ಐ.ಸಿ. ಐ. ಸಿ. ಐ. ಬ್ಯಾಂಕುಗಳಿಂದ ಪಡೆದ್ದ ಅವಧಿ ಸಾಲವನ್ನು ಮರುಪಾವತಿಗಾಗಿ ಸರ್ಕಾರದಿಂದ ಪಡೆದ ಸಾಲ. |
| 31.03.2000 | 141.25 | ಸರ್ಕಾರಕ್ಕೆ ಪಾವತಿಸಬೇಕಾದ ಖರೀದಿ ಕರವನ್ನು ಸರ್ಕಾರವು ಮೃದು ಸಾಲವಾಗಿ ಪರಿವರ್ತಿಸಿರುವುದು. |
| 06-05-2003 | 192.00 | ರೈತರ ಕಬ್ಬಿನ ಬಾಕಿ ಪಾವತಿಗೆ |
| **ಕೇಂದ್ರ ಸರ್ಕಾರದಿಂದ ಪಡೆದ ಸಾಲ** | | |
| 2000 – 01 | 50.00 | ಕಾರ್ಖಾನೆಯ ಕಾರ್ಯವ್ಯಾಪ್ತಿಯಲ್ಲಿ ಕಬ್ಬು ಅಭಿವೃದ್ಧಿ ಪಡಿಸುವ ಸಲುವಾಗಿ, ಕೇಂದ್ರ ಸರ್ಕಾರದ ಕಬ್ಬು ಅಭಿವೃದ್ಧಿ ನಿಧಿಯಿಂದ ಪಡೆದ ಸಾಲ |
| **ಸಹಕಾರಿ ಬ್ಯಾಂಕುಗಳಿಂದ ಪಡೆದ ಸಾಲ ಬಾಕಿ** | | |
| ಅ) ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಂದ ಪಡೆದ ಸಾಲ | 94.15 | ಕಾರ್ಖಾನೆಯ ನಿರ್ಮಾಣದ ಸಮಯದಲ್ಲಿ ಪಡೆದ ಅವಧಿ ಸಾಲ |
| ಆ). ಕೋಟ ವ್ಯವಸಾಯಿಕ ಸಹಕಾರಿ ಸಂಘ (ನಿ) ಕೋಟ | 654.95 | ಕಾರ್ಖಾನೆಯ ದುಡಿಯುವ ಬಂಡವಾಳಕ್ಕಾಗಿಮತ್ತು ಕಬ್ಬಿನ ಮೊತ್ತ ಪಾವತಿಗಾಗಿ, ಕಾರ್ಖಾನೆಯಲ್ಲಿ ಉತ್ಪಾದನೆಯಾದ ಸಕ್ಕರೆಯನ್ನು ಅಡವು ಇಟ್ಟು ಪಡೆಯಲಾದ ಸಾಲ (1999-2000) |
| ಇ) ದ.ಕ.ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ (ನಿ) ಮಂಗಳೂರು | 530.62<br>319.56 | ಕಾರ್ಖಾನೆಯ ದುಡಿಯುವ ಬಂಡವಾಳಕ್ಕಾಗಿ ವಮತ್ತು ಕಬ್ಬಿನ ಮೊತ್ತ ಪಾವತಿಗಾಗಿ, ಕಾರ್ಖಾನೆಯಲ್ಲಿ ಉತ್ಪಾದನೆಯಾದ ಸಕ್ಕರೆಯನ್ನು ಅಡವು ಇಟ್ಟು ಪಡೆಯಲಾದ ಸಾಲ (2001-02) ಮತ್ತು (2002-03) |
| ಈ) ದ.ಕ. ಮತ್ತು ಉಡುಪಿ ಜಿಲ್ಲೆಯ ಪ್ರಾಥಮಿಕ ಸಹಕಾರಿ ಸಂಸ್ಥೆಗಳಿಂದ ಪಡೆದ ಠೇವಣಿ ಮೊತ್ತ | 462.75 | ಕಾರ್ಖಾನೆಗೆ 1998-99 ಮತ್ತು 1999-2000ನೇ ಸಾಲಿನಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ ಅವರ ಗ್ರಾಮದಲ್ಲಿರುವ ಸಹಕಾರ ಸಂಘಗಳು ಕಬ್ಬಿನ ಹಣ ಪಾವತಿ ಮಾಡಿದ್ದು, ಸದ್ರಿ ಸಹಕಾರಿ ಸಂಸ್ಥೆಗಳು ರೈತರಿಗೆ ಪಾವತಿಸಿದ ಕಬ್ಬಿನ ಮೊತ್ತವನ್ನು ಠೇವಣಿಯಾಗಿ ಕಾರ್ಖಾನೆಯಲ್ಲಿ ತೊಡಗಿಸಿರುತ್ತಾರೆ. |
| 27-12-2007 | 286.48 | ಕಾರ್ಖಾನೆಯ ನಿರ್ಮಾಣಕ್ಕೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಂದ ಪಡೆದ ಅವಧಿ ಸಾಲವನ್ನು ಮರುಪಾವತಿಗಾಗಿ ಸರ್ಕಾರದಿಂದ ಪಡೆದ ಸಾಲ. |
| 19-11-2013 | 1200.00 | ರೈತರ ಕಬ್ಬಿನ ಬಾಕಿ ಪಾವತಿಗೆ, ಕಾರ್ಮಿಕರ ವೇತನ ಮತ್ತಿತರ ಬಾಕಿ ಪಾವತಿಗೆ ಮತ್ತು ಪ್ರಾಥಮಿಕ ಸಹಕಾರಿ ಸಂಸ್ಥೆಗಳಿಂದ ಪಡೆದ ಠೇವಣಿಯನ್ನು ಮರುಪಾವತಿಸಲು. |

......3

**ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಬ್ರಹ್ಮಾವರ ಈ ಕಾರ್ಖಾನೆಯು ಸ್ಥಗಿತಗೊಂಡ ನಂತರ ಸರ್ಕಾರದ ವಿವಿಧ ಇಲಾಖೆಗಳಿಗೆ ಪಾವತಿಸಲು ಬಾಕಿ ಇದ್ದ ಮೊತ್ತದ ವಿವರ ಈ ಕೆಳಗಿನಂತಿದೆ.**

(ರೂ.ಲಕ್ಷಗಳಲ್ಲಿ)

| ಬಾಕಿ ವಿವರ | ಅಸಲು | ಬಡ್ಡಿ | ಒಟ್ಟು ಮೊತ್ತ |
|---|---|---|---|
| ಅ) ಜಮೀನು ಮುದ್ರಾಂಕ ಶುಲ್ಕ | 56.00 | | 56.00 |
| ಆ) ವಾಣಿಜ್ಯ ತೆರಿಗೆ | 175.23 | 431.80 | 607.04 |
| ಇ) ಲೆಕ್ಕಪರಿಶೋಧನ ಶುಲ್ಕ ಪಾವತಿಗೆ ಬಾಕಿ | 74.72 | - | 74.72 |
| ಈ) ರಾಜ್ಯ ಸರ್ಕಾರಕ್ಕೆ ಪಾವತಿಸ ಬೇಕಾದ ಗ್ಯಾರಂಟಿ ಕಮಿಷನ್ | 12.51 | - | 12.51 |
| ಉ) ಭವಿಷ್ಯ ನಿಧಿ ಇಲಾಖೆಯವರು ವಿಧಿಸಿದ ಬಡ್ಡಿ | 133.67 | - | 133.67 |
| **ಒಟ್ಟು** | **452.13** | **431.80** | **883.94** |

**ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆ(ನಿ) ಬ್ರಹ್ಮಾವರ ಇದರ ಪ್ರಸ್ತುತ ಇರುವ ಸಾಲದ ಅಸಲು ಮತ್ತು ಬಡ್ಡಿ ಒಟ್ಟು ಮೊತ್ತ.**

(ರೂ.ಲಕ್ಷಗಳಲ್ಲಿ)

| ಬಾಕಿ ವಿವರ | ಅಸಲು | ಬಡ್ಡಿ | ಒಟ್ಟು ಮೊತ್ತ |
|---|---|---|---|
| **ಸರ್ಕಾರಕ್ಕೆ ಪಾವತಿಸ ಬೇಕಾದ ಬಾಕಿ** | | | |
| ಅ) ರಾಜ್ಯ ಸರ್ಕಾರಕ್ಕೆ ಪಾವತಿಸ ಬೇಕಾದ ಸಾಲ | 2832.18 | 3966.49 | 6798.67 |
| ಆ) ಕೇಂದ್ರ ಸರ್ಕಾರದ ಎಸ್.ಡಿ.ಎಫ್.ಸಾಲ | 50.00 | 113.55 | 163.55 |
| ಇ) ಲೆಕ್ಕಪರಿಶೋಧನ ಶುಲ್ಕ ಪಾವತಿಗೆ ಬಾಕಿ | 74.72 | -- | 74.72 |
| ಈ) ರಾಜ್ಯ ಸರ್ಕಾರಕ್ಕೆ ಪಾವತಿಸ ಬೇಕಾದ ಗ್ಯಾರಂಟಿ ಕಮಿಷನ್ | 12.51 | - | 12.51 |
| **ಸಹಕಾರಿ ಬ್ಯಾಂಕುಗಳಿಂದ ಪಡೆದ ಸಾಲ ಬಾಕಿ** | | | |
| ಅ) ದ.ಕ.ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ (ನಿ) ಮಂಗಳೂರು | 50.68 | 150.32 | 201.00 |
| ಇ) ಕೋಟ ವ್ಯವಸಾಯಿಕ ಸಹಕಾರಿ ಸಂಘ (ನಿ) ಕೋಟ<br><br>ಸಕ್ಕರೆ ಅಡವು ಸಾಲ (1999-2000) | 33.38 | 89.21 | 122.59 |
| **ಒಟ್ಟು ಮೊತ್ತ** | **3,053.47** | **4,319.57** | 7373.04 |

| | | |
|---|---|---|
| (ಇ) | ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಯ ಏಕೈಕ ಸಹಕಾರಿ ಸಕ್ಕರೆ ಕಾರ್ಖಾನೆಯು ಎಲ್ಲಾ ಮೂಲಭೂತ ಸೌಕರ್ಯವನ್ನು ಹೊಂದಿದ್ದರೂ, ಆಡಳಿತ ವೈಫಲ್ಯದಿಂದ ಮುಚ್ಚಲ್ಪಟ್ಟಿದ್ದು, | ಕಾರ್ಖಾನೆಯು 2003-04ನೇ ಸಾಲಿನಿಂದ ಸ್ಥಗಿತಗೊಂಡಿದ್ದು, ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ಸಲುವಾಗಿ ಸರ್ಕಾರವು 2007-08ನೇ ಸಾಲಿನಲ್ಲಿ ಮೆ\|\| ರಾಮೀ ಶುಗರ್ಸ್ ಲಿ. ಮುಂಬೈ ಇವರಿಗೆ 30 ವರ್ಷಗಳ ಅವಧಿಗೆ ರೂ.3168.00 ಲಕ್ಷಗಳಿಗೆ ಗುತ್ತಿಗೆ ನೀಡಲಾಗಿತ್ತು. ಗುತ್ತಿಗೆದಾರರು ಕಾರ್ಖಾನೆಯನ್ನು ಗುತ್ತಿಗೆಯಲ್ಲಿ ನಡೆಸಲು ಆಸಕ್ತಿ ತೋರಿಸಲಿಲ್ಲ. ಆದ್ದರಿಂದ ಕಾರ್ಖಾನೆಯನ್ನು ಗುತ್ತಿಗೆ ನೀಡುವ ಸರ್ಕಾರದ ಪ್ರಯತ್ನ ಯಶಸ್ವಿಯಾಗಲಿಲ್ಲ. |

| | | |
|---|---|---|
| | ಅದನ್ನು ಸರಿಪಡಿಸಿ ಕಾರ್ಖಾನೆಯ ಪುನಶ್ಚೇತನಕ್ಕಾಗಿ ಸರ್ಕಾರದ ಕ್ರಮವೇನು? | ಈ ಕಾರ್ಖಾನೆಯು ಕಳೆದ 17 ವರ್ಷಗಳಿಂದ ಸ್ಥಗಿತಗೊಂಡಿರುವುದರಿಂದ ಕರಾವಳಿ ತೀರದ ಹವಾಮಾನದಿಂದಾಗಿ ಯಂತ್ರೋಪಕರಣಗಳು ಸಂಪೂರ್ಣವಾಗಿ ತುಕ್ಕು ಹಿಡಿದು ಉಪಯೋಗಕ್ಕೆ ಬಾರದ ಸ್ಥಿತಿಯಲ್ಲಿವೆ. ಅಲ್ಲದೆ, ಕಾರ್ಖಾನೆಯ ಕಟ್ಟಡವು ಸಂಪೂರ್ಣವಾಗಿ ಶಿಥಿಲಗೊಂಡಿರುತ್ತದೆ.<br>ಆದ್ದರಿಂದ, ಸದರಿ ಕಾರ್ಖಾನೆಯನ್ನು ಗ್ಲೋಬಲ್ ಟೆಂಡರ್ ಮೂಲಕ ಎಲ್.ಆರ್.ಒ.ಟಿ. ಆಧಾರದ ಮೇಲೆ ಗುತ್ತಿಗೆಗೆ ವಹಿಸುವುದು ಸೂಕ್ತವಲ್ಲವೆಂದು ಮತ್ತು ಕಾರ್ಖಾನೆಯ ವತಿಯಿಂದಲೇ ಎಥನಾಲ್, ವಿದ್ಯುತ್ ಉತ್ಪಾದನೆ ಮತ್ತಿತರ ಘಟಕಗಳನ್ನು ಅಳವಡಿಸುವ ಮೂಲಕ ರೈತಪರವಾದ ಯೋಜನೆಗಳನ್ನು ಅನುಷ್ಠಾನಗೊಳಿಸುವ ಮೂಲಕ ರೈತರ ಪರವಾದ ಯೋಜನೆಗಳನ್ನು ಅನುಷ್ಠಾನಗೊಳಿಸಲು ದಿನಾಂಕ: 16.12.2020ರಂದು ಜರುಗಿದ ಕಾರ್ಖಾನೆಯ ಆಡಳಿತ ಮಂಡಳಿಯ ಸಭೆಯಲ್ಲಿ ನಿರ್ಣಯಿಸಲಾಗಿರುತ್ತದೆ.<br>ಸದರಿ ಕಾರ್ಖಾನೆಯ ಪುನಶ್ಚೇತನದ ಬಗ್ಗೆ ಕಾರ್ಖಾನೆಯಿಂದ ಪ್ರಸ್ತಾವನೆ ಬಂದಲ್ಲಿ ಅದರ ಸಾಧಕ-ಬಾಧಕಗಳ ಬಗ್ಗೆ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. |

ಸಂಖ್ಯೆ: ಸಿಐ 279 ಸಿಒಎಫ್ 2021

(ಶಂಕರ್.ಬಿ.ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು.